ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಬೆಂಗಳೂರು ನಗರ ಜಿಲ್ಲೆಯ ಹೊರವರ್ತುಲ ಪ್ರದೇಶದಲ್ಲಿ ಖಾಸಗಿ ಬಡಾವಣೆಗಳ ನಿರ್ಮಾಣದ ಕುರಿತು

ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) :-

946 (954) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮಾಗಡಿ ನಗರ ಯೋಜನಾ ಪ್ರಾಧಿಕಾರದ ತಾವರೆಕೆರೆ ಹೋಬಳಿಯ ವ್ಯಾಪ್ತಿಯಲ್ಲಿ ಸುಮಾರು ಎರಡು ಸಾವಿರ ಎಕರೆ ಪ್ರದೇಶದಲ್ಲಿ ನಿರ್ಮಿತವಾಗಿರುವ ನೂರಾರು ಬಡಾವಣೆಗಳಿಗೆ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಶಾಸನಬದ್ಧ ಸಮ್ಮತಿ ಪತ್ರ ಪಡೆಯಲಾಗಿದೆಯೇ ; ಪಡೆದಿದ್ದಲ್ಲಿ, ಮಂಡಳಿಯ ಮಾರ್ಗಸೂಚಿ ಅನ್ವಯ ತ್ಯಾಜ್ಯ ನಿರ್ವಹಣೆ ಘಟಕಗಳನ್ನು (STP) ನಿರ್ಮಿಸಲಾಗಿದೆಯೇ ; ನಿರ್ಮಿಸಿದ್ದಲ್ಲಿ, ಅದರ ನಿರ್ವಹಣೆ ಹಾಗೂ ಆಡಳಿತಾತ್ಮಕ ಪ್ರಾಧಿಕಾರ ಯಾವುದು; (ವಿವರ ನೀಡುವುದು)

(ಆ) ಪರವಾನಿಗೆ ಪಡೆದ ಘಟಕಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿವೆಯೇ ; (ವಿವರ ನೀಡುವುದು)

(ಇ) ಬೆಂಗಳೂರು ನಗರದ ಸುತ್ತಮುತ್ತ ಅನಧಿಕೃತ ವಸತಿ ಬಡಾವಣೆಗಳು ಗೃಹ ತ್ಯಾಜ್ಯ ಸಂಸ್ಕರಣಾ ಘಟಕದ ಸ್ಥಾಪನೆ (STP) ಮತ್ತು ನಿರ್ವಹಣೆಯ ಅನುಪಸ್ಥಿತಿಯಲ್ಲಿ ಮತ್ತು ಪ್ರಸ್ತುತ ಜಾರಿಯಲ್ಲಿರುವ ಪರಿಸರ ಮಾಲಿನ್ಯ ನಿರ್ಬಂಧನೆಗಳನ್ನು ಉಲ್ಲಂಘಿಸಿ ನಿರ್ಮಾಣಗೊಂಡಿರುವುದರ ಬಗ್ಗೆ ಸರ್ಕಾರದ ನಿಲುವೇನು ; (ಸ್ಪಷ್ಟ ಪಡಿಸುವುದು)

(ಈ) ಈ ಹೊಸ ಬಡಾವಣೆಗಳ ಅವೈಜ್ಞಾನಿಕ ನಿರ್ಮಾಣದಿಂದ ಉದ್ಭವವಾಗುವ ಪರಿಸರದ ನೈರ್ಮಲ್ಯ ಜಲ ಮಾಲಿನ್ಯ ಹಾಗೂ ಅಂತರ್ಜಲದ ಗುಣಮಟ್ಟದ ಸುಧಾರಣೆಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು ? (ವಿವರ ನೀಡುವುದು)